# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆಗುರುತಿಲ್ಲದ ಪ್ರಶ್ನೆಸಂಖ್ಯೆ | : | **103** |
| ಸದಸ್ಯರ ಹೆಸರು | : | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 15-09-2021 |
| ಉತ್ತರಿಸುವ ಸಚಿವರು | : | ಮಾನ್ಯ ಕಂದಾಯ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕಾರವಾರ ಜಿಲ್ಲೆ ಜೋಯಿಡಾ ತಾಲ್ಲೂಕಿನಲ್ಲಿ ಕಳೆದ 2 ವರ್ಷಗಳಿಂದ ಸುರಿದ ಮಳೆಗೆ ಪ್ರವಾಹದಿಂದ ಆಗಿರುವ ನಷ್ಟಕ್ಕೆ ಇಲ್ಲಿಯವರೆಗೆ ಪರಿಹಾರ ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಇಲ್ಲ. ಕಾರವಾರ ಜಿಲ್ಲೆ ಜೋಯಿಡಾ ತಾಲ್ಲೂಕಿನಲ್ಲಿ ಕಳೆದ 02 ವರ್ಷಗಳಿಂದ ಸುರಿದ ಮಳೆಗೆ ಪ್ರವಾಹದಿಂದ ಆಗಿರುವ ನಷ್ಟಕ್ಕೆ ಪರಿಹಾರ ತಂತ್ರಾಂಶದ ಮೂಲಕ ಈ ಕೆಳಗಿನಂತೆ ರೈತರಿಗೆ ಇನ್‌ಪುಟ್ ಸಬ್ಸಿಡಿ ವಿತರಿಸಲಾಗಿದೆ.<br>1) 2019ನೇ ಸಾಲಿನಲ್ಲಿ 1063 ರೈತರಿಗೆ 1,07,19,693/- ಮೊತ್ತದ ಪರಿಹಾರವನ್ನು ನೀಡಲಾಗಿರುತ್ತದೆ.<br>2) 2020ನೇ ಸಾಲಿನಲ್ಲಿ 345 ರೈತರಿಗೆ 34,72,665/- ಮೊತ್ತದ ಪರಿಹಾರವನ್ನು ನೀಡಲಾಗಿರುತ್ತದೆ. |
| (ಆ) | ಜೋಯಿಡಾ ತಾಲ್ಲೂಕಿನಲ್ಲಿ ಪ್ರವಾಹ ಬಂದು ರೈತರು ಮತ್ತು ಸಾಮಾನ್ಯ ನಾಗರೀಕರಿಗೆ ಬಾರಿ ನಷ್ಟವಾಗಿದ್ದು ಸುಮಾರು 343.2 ಹೆಕ್ಟರ್ ಬೆಳೆ ಹಾನಿಯಾಗಿದ್ದು ಹಾಗೂ ಸುಮಾರು 8 ಕೋಟಿ ರೂ ಸಾಗುವಳೀ ಮಾಡದ ಕೃಷಿ ಭೂಮಿಯು ಕೂಡ ತೊಂದರೆಗೀಡಾಗಿದ್ದು ಸದರಿ ಹಾನಿಗೆ ಪರಿಹಾರ ನೀಡಲು ಎಷ್ಟು ಕಾಲಾವಕಾಶ ಬೇಕಾಗುವುದು (ವಿವರ ನೀಡುವುದು) | 2021ರಲ್ಲಿ ಸುರಿದ ಮಳೆಯಿಂದ ಜೋಯಿಡಾ ತಾಲ್ಲೂಕಿನಲ್ಲಿ ಈ ಕೆಳಗಿನಂತೆ ಹಾನಿಯಾಗಿರುತ್ತದೆ.<br>1) ಭೂಕುಸಿತದಿಂದ ಹಾನಿ 1.2 ಹೆಕ್ಟೇರ್.<br>2) ಬೆಳೆಹಾನಿ 62 ಹೆಕ್ಟೇರ್.<br>3) ಜಮೀನಿನಲ್ಲಿ ಮರಳು ಸಂಗ್ರಹದಿಂದ ಹಾನಿ 360 ಹೆಕ್ಟೇರ್ (ಸಾಗುವಳಿ ಮಾಡದ ಕೃಷಿ ಭೂಮಿ)<br>ಸದರಿ ಹಾನಿಯ ಸರ್ವೆ ಕಾರ್ಯ ಮುಕ್ತಾಯವಾಗಿದ್ದು, ಎಲ್ಲ ರೈತರ ವಿವರಗಳನ್ನು ಪರಿಹಾರ ತಂತ್ರಾಂಶದಲ್ಲಿ ದಾಖಲಿಸಲಾಗುತ್ತಿದೆ. ದಾಖಲೀಕರಣ ಮುಗಿದ ನಂತರ ಈ ಸಾಲಿನ ಪರಿಹಾರ ಧನವು ರೈತರಿಗೆ ನೇರವಾಗಿ ಅವರ ಬ್ಯಾಂಕ್ ಖಾತೆಗೆ ಜಮೆಯಾಗುತ್ತದೆ. |
| (ಇ) | 2019 ರಲ್ಲಿ ಮಳೆಯಿಂದ ಹಾನಿಗೊಳಗಾದ ರೈತರಿಗೆ ಇಲ್ಲಿಯವರೆಗೆ ಸರ್ಕಾರ ಪರಿಹಾರ ನೀಡದಿರುವುದು ನಿಜವೇ; ಹಾಗಿದ್ದಲ್ಲಿ, (ಸದರಿ ಅವಧಿಯಲ್ಲಿ ಪರಿಹಾರ ನೀಡಿರುವ ವಿವರ ನೀಡುವುದು) ಈ ಸಾಲಿನಲ್ಲಿ ರೈತರಿಗೆ ಆದ ಹಾನಿಗೆ ಪರಿಹಾರ ನೀಡಲಾಗಿದೆಯೇ? (ವಿವರ ನೀಡುವುದು) | 2019 ರಲ್ಲಿ ಮಳೆಯಿಂದ ಹಾನಿಗೊಳಗಾದ 1063 ರೈತರಿಗೆ 1,07,19,693/- ಮೊತ್ತದ ಪರಿಹಾರ ನೀಡಲಾಗಿರುತ್ತದೆ.<br>ಈ ಸಾಲಿನಲ್ಲಿ ಬೆಳೆ ಹಾನಿಯಾದ ರೈತರ ವಿವರಗಳನ್ನು ಪರಿಹಾರ ತಂತ್ರಾಂಶದಲ್ಲಿ ದಾಖಲಿಸಿ, ಪರಿಹಾರ ವಿತರಿಸುವ ಕ್ರಮವು ಪ್ರಗತಿಯಲ್ಲಿರುತ್ತದೆ. |

*ಕಂಇ 396 ಟಿಎನ್‌ಆರ್ 2021*

(ಆರ್. ಅಶೋಕ)
ಕಂದಾಯಸಚಿವರು